# ಕರ್ನಾಟಕ ವಿಧಾನ ಪರಿಷತ್

1 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 551
2 ಸದಸ್ಯರ ಹೆಸರು : ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3 ಉತ್ತರಿಸುವ ದಿನಾಂಕ : 16-12-2021
4 ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬಿ.ಬಿ.ಎಂ.ಪಿಗೆ ರಸ್ತೆ ಗುಂಡಿ ಮುಚ್ಚುವಲ್ಲಿ ಲೋಪ ಸರಿಪಡಿಸಿಕೊಳ್ಳಿ ಎಂದು ಹೈಕೋರ್ಟ್ ಸ್ಪಷ್ಟ ನಿರ್ದೇಶನ ನೀಡಿದರೂ ಕೂಡ, ಬೆಂಗಳೂರು ಹಲವು ಕಡೆ ಇನ್ನೂ ಗುಂಡಿಮುಚ್ಚುವ ಕೆಲಸ ಹಾಗೆಯೇ ಬಾಕಿ ಉಳಿದಿರುವುದಕ್ಕೆ ಕಾರಣವೇನು; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯ ಬಹುತೇಕ ಹೆಚ್ಚಿನ ರಸ್ತೆಗಳು ಕೇವಲ ರಸ್ತೆಯ ಜಾಗವಾಗಿ ವಾಹನ ಸಂಚಾರಕ್ಕೆ ಮಾತ್ರವೇ ಉಪಯೋಗಿಸದೇ, ಹಲವಾರು ಸಂಸ್ಥೆಗಳು ವಿವಿಧ ರೀತಿಯ ಅನುಸಾಧನಗಳನ್ನು ಅಳವಡಿಸಿ, ಸಾರ್ವಜನಿಕರ ಉಪಯೋಗಕ್ಕೆ ಸಂಪರ್ಕ ನೀಡಲು ಸಹ ಬಳಸಲಾಗುತ್ತಿರುತ್ತದೆ.<br><br>ಸರ್ಕಾರದ ಇತರೆ ಅಂಗ ಸಂಸ್ಥೆಗಳಾದ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಸ್ಕಾಂ, ಕೆ.ಪಿ.ಟಿ.ಸಿ.ಎಲ್, ಗೇಲ್‌ಗ್ಯಾಸ್, ಗೇಲ್ ಇಂಡಿಯಾ, ಸಣ್ಣ ನೀರಾವರಿ ಇಲಾಖೆ, ನಮ್ಮ ಮೆಟ್ರೋ, ಬಿಎಸ್ಎನ್ಎಲ್, ರಕ್ಷಣಾ ಇಲಾಖೆ ಮತ್ತು ಇತರೆ ಓಎಫ್‌ಸಿ ಅಳವಡಿಕೆ ಖಾಸಗಿ ಸಂಸ್ಥೆಗಳು, ಅನುಸಾಧನಗಳನ್ನು ಅಳವಡಿಸಲು ಉಪಯೋಗಿಸಲಾಗುತ್ತಿದೆ. ಸದರಿ ಅನುಸಾಧನವನ್ನು ಅಳವಡಿಸುವ ಮತ್ತು ಪುನರ್ ದುರಸ್ಥಿಪಡಿಸುವ ಸಂದರ್ಭಗಳಲ್ಲಿಯೂ ರಸ್ತೆಯನ್ನು ಅಗೆಯುವುದರಿಂದ ಮತ್ತು 2021ನೇ ಸಾಲಿನ ಅಕಾಲಿಕ ಸತತ ಹೆಚ್ಚಿನ ಪ್ರಮಾಣದ ಮಳೆಯಿಂದ ಹೆಚ್ಚಾಗಿ ರಸ್ತೆ ಗುಂಡಿಗಳಾಗಿರುತ್ತವೆ. ಈ ವಿಷಯವನ್ನು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಗಮನಕ್ಕೂ ಸಹ ತರಲಾಗಿರುತ್ತದೆ ಮತ್ತು ಸತತವಾಗಿ ಬಿದ್ದಂತಹ ಹೆಚ್ಚಿನ ಮಳೆಯಿಂದ ಬಿ.ಬಿ.ಎಂ.ಪಿ. ವ್ಯಾಪ್ತಿಯಲ್ಲಿರುವ ಎಲ್ಲಾ 198 ವಾರ್ಡ್ ರಸ್ತೆಗಳು ಮತ್ತು ಆರ್ಟೀರಿಯಲ್ / ಸಬ್-ಆರ್ಟೀರಿಯಲ್ ರಸ್ತೆಗಳ ಗುಂಡಿ ಮುಚ್ಚುವ/ ದುರಸ್ಥಿಪಡಿಸುವ ಕೆಲಸ ಕಾರ್ಯಗಳು ವಿಳಂಬವಾಗಿರುತ್ತದೆ.<br><br>ಮುಂದುವರೆದು, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ 110 ಹಳ್ಳಿಗಳ ಪ್ರದೇಶಗಳಲ್ಲಿ ನೀರು ಸರಬರಾಜು ಮತ್ತು ಒಳಚರಂಡಿ ಕೊಳವೆ ಅಳವಡಿಸುವ ಮಹತ್ವದ ಯೋಜನೆಯನ್ನು ಕೈಗೊಂಡು ಅನುಷ್ಠಾನಗೊಳಿಸುತ್ತಿರುವುದರಿಂದ, ಪ್ರಮುಖವಾಗಿ ಪಾಲಿಕೆಯ ಹೊರವಲಯಗಳಲ್ಲಿನ ಅತೀ ಹೆಚ್ಚಿನ ರಸ್ತೆಗಳನ್ನು ಕೊಳವೆ ಅಳವಡಿಸಲು ಕತ್ತರಿಸಿರುವುದರಿಂದ ರಸ್ತೆಗಳು ಹಾಳಾಗಿ, ರಸ್ತೆ ಗುಂಡಿಗಳು ಉದ್ಭವಿಸಿರುತ್ತವೆ. |

| | | |
|---|---|---|
| | | ಪ್ರಸ್ತುತ ಮಳೆಯ ಪ್ರಮಾಣ ಕಡಿಮೆಯಾಗಿರುವುದರಿಂದ ಪಾಲಿಕೆ ವತಿಯಿಂದ ಸ್ಥಾಪಿಸಿರುವ ಆಸ್ಫಾಲ್ಟ್ ಬ್ಯಾಚ್‌ಮಿಕ್ಸ್ ಪ್ಲಾಂಟ್‌ನ್ನು ಪುನರಾರಂಭಿಸಲಾಗಿದೆ. ಅಲ್ಲದೇ, ಪಾಲಿಕೆ ವ್ಯಾಪ್ತಿಯ ಎಲ್ಲಾ 198 ವಾರ್ಡ್‌ಗಳಲ್ಲಿ ರಸ್ತೆ ನಿರ್ವಹಣೆ ಮಾಡುವುದರ ಸಂಬಂಧ ಟೆಂಡರ್ ಮುಖೇನ ಗುತ್ತಿಗೆದಾರರನ್ನು ನಿಯೋಜಿಸಿಕೊಂಡು, ರಸ್ತೆಗಳನ್ನು ಸುವ್ಯವಸ್ಥಿತವಾಗಿರಿಸಲು ವಿಳಂಬವಿಲ್ಲದಂತೆ, ಉತ್ತಮ ಹವಾಮಾನದ ಆಧಾರದ ಮೇಲೆ ರಸ್ತೆ ನಿರ್ವಹಣೆ ಕಾರ್ಯವನ್ನು ನಿರ್ವಹಿಸಲು ಕ್ರಮಕೈಗೊಳ್ಳಲಾಗುತ್ತಿರುತ್ತದೆ. |
| ಆ | ಕಳೆದ ಎರಡು ವರ್ಷಗಳಿಂದ ಬೆಂಗಳೂರಿನಲ್ಲಿ ರಸ್ತೆ ಗುಂಡಿಗಳಿಂದ ಅಪಘಾತಕ್ಕೆ ಒಳಗಾದವರ ಸಂಖ್ಯೆ ಎಷ್ಟು; ಇದರಲ್ಲಿ ಸಾವಿಗೀಡಾದವರ ಸಂಖ್ಯೆ ಎಷ್ಟು; | ಬೆಂಗಳೂರು ನಗರದಲ್ಲಿ 2020 ಹಾಗೂ 2021 ನೇ ಸಾಲಿನಲ್ಲಿ ರಸ್ತೆ ಗುಂಡಿಗಳಿಂದ ಅಪಘಾತಕ್ಕೆ ಒಳಗಾದವರ ಹಾಗೂ ಮೃತಪಟ್ಟವರ ವಿವರ ಈ ಕೆಳಕಂಡಂತಿರುತ್ತದೆ. |

| 2020 | | 2021 | |
|---|---|---|---|
| ಅಪಘಾತಗಳ ಸಂಖ್ಯೆ | ಮೃತರ ಸಂಖ್ಯೆ | ಅಪಘಾತಗಳ ಸಂಖ್ಯೆ | ಮೃತರ ಸಂಖ್ಯೆ |
| 03 | 03 | 08 | 07 |

| | | |
|---|---|---|
| ಇ | ಅಪಘಾತಕ್ಕೆ ಒಳಗಾದವರಿಗೆ ಸರ್ಕಾರ ಯಾವ ರೀತಿ ನೆರವು ನೀಡಿದೆ; ಮತ್ತು ಸಾವಿಗೀಡಾದವರ ಕುಟುಂಬದವರಿಗೆ ಯಾವ ನೆರವು ನೀಡಿದೆ; ನೆರವು ನೀಡದಿದ್ದಲ್ಲಿ ಕಾರಣಗಳೇನು; ನೆರವು ನೀಡಲು ಸರ್ಕಾರಕ್ಕೆ ಇರುವ ತೊಂದರೆಗಳೇನು; | ರಸ್ತೆ ಗುಂಡಿಯ / ಅವೈಜ್ಞಾನಿಕ ರಸ್ತೆ ನಿರ್ವಹಣೆ ಕಾರಣದಿಂದ ರಸ್ತೆ ಅಪಘಾತಕ್ಕೆ ಒಳಪಡುವ ವ್ಯಕ್ತಿಗಳಿಗೆ ಪರಿಹಾರ ನೀಡುವ ಕುರಿತು ಮಾನ್ಯ ಉಚ್ಚ ನ್ಯಾಯಾಲಯದ ಸಾರ್ವಜನಿಕ ಹಿತಾಸಕ್ತಿ ಪ್ರಕರಣದಲ್ಲಿರುವ ನಿರ್ದೇಶನದ ಅನುಸಾರ ಪಾಲಿಕೆಯು ಗಾಯಗೊಂಡ / ಮೃತಪಟ್ಟ ವ್ಯಕ್ತಿಗಳಿಗೆ ಪರಿಹಾರ ನೀಡುವ ಕುರಿತು ನಿಗಧಿತ ಮಾರ್ಗಸೂಚಿಗಳನ್ನು ತಯಾರಿಸಿದ್ದು, ಪಾಲಿಕೆಗೆ ಅರ್ಜಿ ಸಲ್ಲಿಸಿ, ಸೂಕ್ತ ಪರಿಹಾರ ಪಡೆಯಲು ತಿಳಿಸಿ ಪತ್ರ ಸಂಖ್ಯೆ: ಆಯುಕ್ತರು/ಪಿ.ಆರ್/4610/2020-21, ದಿನಾಂಕ: 01-12-2020ರ ಪತ್ರಿಕಾ ಪ್ರಕಟಣೆ ಮೂಲಕ ಸಾರ್ವಜನಿಕರ ಗಮನಕ್ಕೆ ತರಲಾಗಿರುತ್ತದೆ. |
| ಈ | ಸರ್ಕಾರ ಅಪಘಾತಕ್ಕೆ ಒಳಪಟ್ಟವರಿಗೆ ಯಾವ ಕಾಲಮಿತಿಯೊಳಗೆ ನೆರವು ನೀಡಲಾಗುವುದು | |

**ಸಂಖ್ಯೆ: ನಅಇ 360 ಎಂಎನ್‌ವೈ 2021**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ